ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ರಾಜ್ಯದ ಅರಣ್ಯದಂಚಿನ ಖಾಸಗಿ ಭೂಮಿಗಳನ್ನು ಮಾರುಕಟ್ಟೆ ದರದಲ್ಲಿ ಖರೀದಿಸುವ ಬಗ್ಗೆ

ಶ್ರೀ ಸುನಿಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

132 (149) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಅರಣ್ಯ ಪ್ರದೇಶದ ಅಂಚಿನಲ್ಲಿರುವ ರೈತರು/ಖಾಸಗಿಯವರು ಅಲ್ಲಿ ಬೆಳೆಗಳನ್ನು ಬೆಳೆಯಲು ಸಾಧ್ಯವಾಗದೆ ತಮ್ಮ ಜಮೀನುಗಳನ್ನು ಅರಣ್ಯ ಇಲಾಖೆಗೆ ಮಾರಾಟ ಮಾಡಲು ತಯಾರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇಂತಹ ಖಾಸಗಿಯವರಿಂದ ಜಮೀನುಗಳನ್ನು ಕೊಳ್ಳಲು ಸರ್ಕಾರದ ಕ್ರಮಗಳೇನು; (ವಿವರ ನೀಡುವುದು)

(ಆ) ಕಳೆದ ಮೂರು ವರ್ಷಗಳಲ್ಲಿ ಇಂತಹ ಭೂಮಿಗಳನ್ನು ಕೊಂಡುಕೊಂಡಿದ್ದಲ್ಲಿ ಅದರ ವಿಸ್ತೀರ್ಣ, ಎಕರೆಗೆ ನೀಡಲಾದ ದರಗಳ ಮಾಹಿತಿ ನೀಡುವುದು;

(ಇ) ಕೊಡಗು ಜಿಲ್ಲೆಯಲ್ಲಿ ಇಂತಹ ಪ್ರಕರಣಗಳು ಯಾವುದಾದರೂ ಇವೆಯೇ; ಇದ್ದಲ್ಲಿ ಅವುಗಳ ವಿವರಗಳನ್ನು ನೀಡುವುದು; ಹಾಗೂ ಈ ಪ್ರಕರಣಗಳಲ್ಲಿ ಇಲ್ಲಿಯವರೆಗೆ ಆಗಿರುವ ಪ್ರಗತಿಯ ಪೂರ್ಣ ವಿವರಗಳನ್ನು ನೀಡುವುದು;

(ಈ) ಕಳೆದ ಮೂರು ವರ್ಷಗಳಲ್ಲಿ ಇಂತಹ ಪ್ರಕರಣಗಳಿಗೆ ಸರ್ಕಾರವು ನೀಡಲಾಗಿರುವ ಅನುದಾನವೆಷ್ಟು ? (ಪೂರ್ಣ ವಿವರ ನೀಡುವುದು)